# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 80(864)
ಸದಸ್ಯರ ಹೆಸರು : ಶ್ರೀ ಎಸ್.ಎಲ್.ಭೋಜೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 20-09-2021.
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರಗಳು |
|---|---|---|
| ಅ) | ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಪ್ರಭಾರ ಪ್ರಾಂಶುಪಾಲರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಹಿರಿಯ ಉಪನ್ಯಾಸಕರಿಗೆ ಗಳಿಕೆ ರಜೆ ನಿರಾಕರಿಸಲಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಹೌದು |
| ಆ) | ಕೆ.ಸಿ.ಎಸ್.ಆರ್. ನಿಯಮ 113(3)ಎ ಮತ್ತು ಬಿ ಪ್ರಕಾರ ಪ್ರಭಾರ ಪ್ರಭಾರ ಕರ್ತವ್ಯಕ್ಕೆ ಗಳಿಕೆ ರಜೆ ನೀಡಬೇಕು ಎಂದಿದ್ದರೂ ನಿರಾಕರಣೆ ಮಾಡುತ್ತಿರುವುದೇಕೆ; | ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ ಪ್ರಾಂಶುಪಾಲರ ಹುದ್ದೆಗಳಿಗೆ ಈ ಕೆಳಕಂಡ ಎರಡು ನಿಯಮಗಳಡಿ ಪ್ರಭಾರದಲ್ಲಿರಿಸಲು ಅವಕಾಶವಿದೆ.<br><br>1) ನಿಯಮ 32 ರಡಿ ಸ್ವತಂತ್ರ ಪ್ರಭಾರ<br>2) ನಿಯಮ 68 ರಡಿ ಹೆಚ್ಚುವರಿ ಪ್ರಭಾರ<br><br>ಸ್ವತಂತ್ರ ಪ್ರಭಾರದಡಿ ನೇಮಕವಾದ ಉಪನ್ಯಾಸಕರು ಪ್ರಾಂಶುಪಾಲರು ಹುದ್ದೆಯ ಕಾರ್ಯಭಾರವನ್ನು ಮಾತ್ರ ನಿರ್ವಹಿಸುತ್ತಾರೆ. ಇವರು ಪ್ರಾಂಶುಪಾಲರ ಹುದ್ದೆಗೆ ಬಡ್ತಿ ನೀಡಲು ಅಗತ್ಯವಿರುವ ಅರ್ಹತೆ ಪಡೆದಿರುತ್ತಾರೆ. ಅಂದರೆ ನಿಯಮಾನುಸಾರ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡುವುದಲ್ಲದೆ ಜೇಷ್ಠತೆಯಲ್ಲಿ ಹಿರಿಯರಾಗಿರುತ್ತಾರೆ. ಆದುದರಿಂದ ಇವರಿಗೆ ನಿಯಮಾನುಸಾರ ಪ್ರಭಾರ ಭತ್ಯೆಯಿಲ್ಲದೆ ಗಳಿಕೆ ರಜೆ ಪಡೆಯಲು ಅರ್ಹರಿರುತ್ತಾರೆ.<br><br>ಹೆಚ್ಚುವರಿ ಪ್ರಭಾರದಡಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸು ಉಪನ್ಯಾಸಕರು, ಉಪನ್ಯಾಸಕರ ಕಾರ್ಯಭಾರದ ಜೊತೆಗೆ ಪ್ರಾಂಶುಪಾಲರ ಹುದ್ದೆಯ ಹೆಚ್ಚುವರಿ ಕಾರ್ಯವನ್ನು ಮಾತ್ರ ನಿರ್ವಹಿಸುತ್ತಾರೆ. ಇವರಿಗೆ ಹೆಚ್ಚುವರಿಯಾಗಿ ನಿಯಮಾನುಸಾರ ಪ್ರಭಾರ ಭತ್ಯೆ ನೀಡಲಾಗುತ್ತದೆ. ಗಳಿಕೆ ರಜೆ ನೀಡುವ ಕುರಿತು ಮಹಾಲೇಖಪಾಲರು ಪತ್ರ ದಿನಾಂಕ:23.03.2006ರಲ್ಲಿ ಈ ಕೆಳಕಂಡಂತೆ ಸ್ಪಷ್ಟೀಕರಣ ನೀಡಿರುತ್ತಾರೆ.<br><br>"If earned leave has been credited ar |

| | | |
|---|---|---|
| | | non-vacation department rates. This is incorrect. Unless the officer is placed in independent capacity under Rule 32 of KCSR'S leave should be credited at the rates applicable to vacation department only." |
| ಇ) | ಪ್ರಾಥಮಿಕ ಮತ್ತು ಪ್ರೌಢ ಶಾಲಾ ಹಿರಿಯ ಶಿಕ್ಷಕರುಗಳು ಪ್ರಭಾರ ಕರ್ತವ್ಯ ನಿರ್ವಹಿಸಿದಾಗ ಅವರುಗಳಿಗೆ ಗಳಿಕೆ ರಜೆ ನೀಡಿದ್ದು, ಪದವಿ ಪೂರ್ವ ಪ್ರಭಾರ ಪ್ರಾಂಶುಪಾಲರಿಗೆ ಗಳಿಕೆ ರಜೆಯ ನಿರಾಕರಣೆ ಸಾಮಾಜಿಕ ನ್ಯಾಯದ ಉಲ್ಲಂಘನೆ ಅಲ್ಲವೇ? (ಪೂರ್ಣ ಮಾಹಿತಿ ಒದಗಿಸುವುದು) | ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂಖ್ಯೆ: ಇಪಿ 140 ಡಿಜಿಡಬ್ಲ್ಯೂ 2021

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.